ಎಚ್. ರೇವಣಸಿದ್ದಪ್ಪ

# ಸ್ವಾತಂತ್ರ್ಯ ಹೋರಾಟದ ವಿಶ್ಲೇಷಣೆ

ನಮ್ಮ ಇತಿಹಾಸದ ಪಠ್ಯಪುಸ್ತಕಗಳಲ್ಲಿ, ವಿಶ್ವ ಕೋಶಗಳಲ್ಲಿ ಮತ್ತು ಇತರ ಐತಿಹಾಸಿಕ ಗ್ರಂಥಗಳಲ್ಲಿ ಚಾಂದ್‌ಬೀಬಿ, ಕೆಳದಿ ವೀರಮ್ಮ, ಹೈದರಾಲಿ, ಟಿಪ್ಪು ಸುಲ್ತಾನ್, ಧೊಂಡೋವಾಘ್, ವೀರಪಾಂಡ್ಯ ಕಟ್ಟ ಬಮ್ಮನ್, ಕಿತ್ತೂರು ಚೆನ್ನಮ್ಮ, ಸಂಗೊಳ್ಳಿರಾಯಣ್ಣ, ಮಂಗಳಪಾಂಡೆ, ಝಾನ್ಸಿಲಕ್ಷ್ಮಿಬಾಯಿ, ನಾನಾಸಾಹೇಬ, ಸುರಪುರದ ವೆಂಕಟಪ್ಪನಾಯಕ,ಮುಂಡರಗಿ ಭೀಮರಾವ್ ಮೊದಲಾದವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದು ಬಣ್ಣಿಸಲಾಗಿದೆ. ಅಲ್ಲದೆ, ಡಬ್ಲ್ಯು. ಸಿ. ಬ್ಯಾನರ್ಜಿ, ದಾದಾಬಾಯಿ ನವರೋಜಿ, ಗೋಖಲೆ, ತಿಲಕ್, ಗಾಂಧೀಜಿ, ಸುಭಾಷ್, ನೆಹರೂ ಮೊದಲಾದವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದೇ ಪರಿಗಣಿಸಲಾಗಿದೆ.

ವಾಸ್ತವವಾಗಿ, ಅವರಲ್ಲಿ ಕೆಲವರು ಸ್ವತಂತ್ರ ರಾಗಿದ್ದು ಪರಕೀಯರ ದಾಳಿಗಳನ್ನು ಎದುರಿಸಿದವರು. ಮತ್ತೆ ಕೆಲವರು ತಮ್ಮ ಆಸ್ತಿಪಾಸ್ತಿಗಳಿಗಾಗಿಯೂ ಬಿರುದುಗಳಿಗಾಗಿಯೂ ಮಾಸಾಶನಕ್ಕಾಗಿಯೂ ಹೋರಾ ಡಿದವರು. ಸಾಂಪ್ರದಾಯಿಕ ಹಾಗೂ ಧಾರ್ಮಿಕ ಹಕ್ಕುಗಳಿಗಾಗಿ ಹೋರಾಡಿರುವವರೂ ಉಂಟು. ಕೆಲವರು ಮಾತ್ರವೇ ಕಳೆದುಕೊಂಡ ತಮ್ಮ ಸ್ವಾತಂತ್ರ್ಯವನ್ನು ಪಡೆಯಲು ಹೋರಾಡಿರುವರು.

ಅಹಮದ್‌ನಗರದ ಚಾಂದ್‌ಬೀಬಿಯು ಸ್ವತಂತ್ರ ಳಾಗಿದ್ದು, ಕ್ರಿ.ಶ. ೧೫೯೦ರಲ್ಲಿ ಅಕ್ಬರನ ವಿರುದ್ಧ ಹೋರಾಡಿದಳು. ಕೆಳದಿಯ ವೀರಮ್ಮ ಹೋರಾಡಿದುದು ಹೈದರಾಲಿಯ ವಿರುದ್ಧ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಕೂಡ ಸ್ವತಂತ್ರರಾಗಿದ್ದು, ಬ್ರಿಟಿಷರ ವಿರುದ್ಧ ಹೋರಾಡಿದರು. ಇವರು ಸ್ವಾತಂತ್ರ್ಯವನ್ನು ಕಳೆದು ಕೊಂಡಿಲ್ಲದ್ದರಿಂದ ಇವರವನ್ನು ವಿದೇಶೀಯ ಆಕ್ರಮಣ ಗಳ ವಿರುದ್ಧ ಹೋರಾಟಗಳೆಂದು ಪರಿಗಣಿಸಬಹುದು.

ಧೊಂಡೋವಾಘ್ ಎಂಬುವನು ಚನ್ನಗಿರಿ ನಿವಾಸಿ ಯಾಗಿದ್ದು, ಟಿಪ್ಪುವಿನ ಪತನಾನಂತರ ಅರಾಜಕತೆಯ ಕಾಲದಲ್ಲಿ, ಸಾಹಸಕಾರ್ಯಗಳನ್ನು ಮಾಡಲು ಗುಂಪು ಕಟ್ಟಿ ಜನರ ಸುಲಿಗೆ ಮಾಡತೊಡಗಿದನು. ಮಹಿಳೆಯರ ಆಭರಣಗಳನ್ನೂ ಶ್ರೀಮಂತರ ಸಂಪತ್ತನ್ನೂ ಕೊಳ್ಳೆ ಹೊಡೆದನು. ಇವನನ್ನು ಬ್ರಿಟಿಷರು ಹತ್ತಿಕ್ಕಿದರು. ಇಂಥವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದು ಕರೆ ಯುವುದು ಕಷ್ಟವಾಗುತ್ತದೆ.

ತಮಿಳುನಾಡಿನ ವೀರಪಾಂಡ್ಯ ಕಟ್ಟಬಮ್ಮನ್ ತನ್ನ ಜಾಗೀರು ಉಳಿಸಿಕೊಳ್ಳಲು ಹೋರಾಡಿದ್ದರಿಂದ ಅವನನ್ನು ಸ್ವಾತಂತ್ರ್ಯ ಹೋರಾಟಗಾರನೆನ್ನುವುದು ಸರಿ ಯಲ್ಲ. ಕಿತ್ತೂರು ಚೆನ್ನಮ್ಮ ತನ್ನ ದತ್ತುಮಗನ ಹಕ್ಕಿಗಾಗಿ ಹೋರಾಡಿ ಸೋತು ಸೆರೆಮನೆಯಲ್ಲಿ ಇದ್ದಾಗಲೂ ವಾರ್ಷಿಕ ಒಂದುವರೆ ಲಕ್ಷ ರೂಪಾಯಿಗಳ ರಾಜಧನ ವನ್ನು ಬ್ರಿಟಿಷರಿಂದ ಪಡೆದಳು. ಆದ್ದರಿಂದ ಅವಳ ಹೋರಾಟ ಸ್ವಾತಂತ್ರ್ಯಕ್ಕಾಗಿ ಆಗಿರಲಿಲ್ಲ. ಹಾಗೆಯೇ, ಸಂಗೊಳ್ಳಿರಾಯಣ್ಣನು ತನ್ನ ರಾಣಿ ಮತ್ತು ದತ್ತು ಮಗನ ಹಕ್ಕಿಗಾಗಿ ಸ್ವಾಮಿನಿಷ್ಠೆಯಿಂದ ಹೋರಾಟ ಮಾಡಿದನು. ಅವನನ್ನು ಮಹಮಲೆದಾರ ಕೃಷ್ಣರಾಯ, ಶ್ರೀಮಂತ ಲಿಂಗನಗೌಡ ಮೊದಲಾದವರು ಮೋಸಮಾಡಿ ಬ್ರಿಟಿಷರಿಗೆ ಹಿಡಿದುಕೊಟ್ಟರು.ಆದ್ದರಿಂದ ರಾಯಣ್ಣನದು

ಸ್ವಾಮಿನಿಷ್ಠೆಯ ಹೋರಾಟವೇ ಹೊರತು ಸ್ವಾತಂತ್ರ್ಯ ಹೋರಾಟವಲ್ಲ.

ಮಂಗಳಪಾಂಡೆ ಎಂಬುವನು ೧೮೫೭ರಲ್ಲಿ ದನದ ಕೊಬ್ಬಿನಿಂದ ಮಾಡಿದ ಕಾರ್ಟ್ರಿಡ್ಜನ್ನು ಉಪಯೋಗಿಸುವ ವಿರುದ್ಧ ಪ್ರತಿಭಟಿಸಿ ಸೈನಿಕರ ದಂಗೆಗೆ ಕಾರಣನಾದನು. ಅದು ಸ್ವಾತಂತ್ರ್ಯ ಹೋರಾಟವಾಗಿರದೆ ಧಾರ್ಮಿಕ ಹೋರಾಟವಾಗಿತ್ತು. ಈ ಸಿಪಾಯಿ ದಂಗೆಯ ಕಾಲದಲ್ಲಿ ಸ್ವದೇಶಿಯ ಲೂಟಿ ಮಾಡಲಾಯಿತು ; ಕಗ್ಗೊಲೆಯೂ ನಡೆಯಿತು.

ಝಾನ್ಸಿ ಲಕ್ಷ್ಮಿಬಾಯಿಯು ದತ್ತುಮಗನ ಹಕ್ಕಿಗಾಗಿ ಕೋರಿ ವಿಫಲಗೊಂಡು, ವರ್ಷಕ್ಕೆ ಎರಡೂವರೆ ಸಾವಿರ ರೂಪಾಯಿ ಮಾಸಿಕ ಪರಿಹಾರಧನವನ್ನು ೧೮೫೩ರಿಂದ ೧೮೫೮ರ ವರೆಗೆ ಪಡೆದಳು. ೧೮೫೭ರಲ್ಲಿ ದಂಗೆಯ ಕಾಲದಲ್ಲಿ ಅನೇಕ ಬ್ರಿಟಿಷ್ ಮಹಿಳೆಯರಿಗೆ, ಬಾಲಕರಿಗೆ, ವೃದ್ಧರಿಗೆ ರಕ್ಷಣೆ ಕೊಟ್ಟಳು. ಅನಂತರ ದಂಗೆಯೆದ್ದ ಸಿಪಾಯಿಗಳಿಗೆ ಮಣಿದು, ದತ್ತುಮಗನ ಹಕ್ಕಿಗೆ ಹೋರಾಡಿ ವೀರಮರಣವನ್ನಪ್ಪಿದಳು.

ಉಳಿದವರಲ್ಲಿ, ನಾನಾಸಾಹೇಬ್ ಕೂಡ ಜಹಗೀರಿಗಾಗಿ, ಮಾಸಾಶನಕ್ಕಾಗಿ ಹೋರಾಡಿ ಪಲಾಯನ ಮಾಡಿದನು. ಸುರಪುರದ ವೆಂಕಟಪ್ಪನಾಯಕನು ತನ್ನ ಬೇಡ ಜನಾಂಗದವರ ಶಸ್ತ್ರಧಾರಣೆಯ ಹಕ್ಕಿಗಾಗಿ ಹೋರಾಡಿ ಸೋತು ಆತ್ಮಹತ್ಯೆ ಮಾಡಿಕೊಂಡನು. ಮುಂಡರಗಿ ಭೀಮರಾವ್ ಕ್ರೈಸ್ತ ಮತಾಂತರಗಳ ವಿರುದ್ಧ ಬ್ರಿಟಿಷರೊಡನೆ ಹೋರಾಡಿ ಮಡಿದನು.

ಆರಂಭದ ಕಾಂಗ್ರೆಸ್ ಧುರೀಣರಾಗಿದ್ದ ಡಬ್ಲ್ಯು. ಸಿ. ಬ್ಯಾನರ್ಜಿ, ಗೋಖಲೆ, ತಿಲಕ್ ಮೊದಲಾದವರು ಎ. ಓ. ಹ್ಯೂಮ್‌ರ ಜೊತೆಗೂಡಿ ಬ್ರಿಟಿಷ್ ಪ್ರಭುತ್ವವು ಭಾರತದಲ್ಲಿ ಶಾಶ್ವತವಾಗಿರಬೇಕೆಂದೂ ಅವರ ಆಳ್ವಿಕೆಯಲ್ಲಿ ಸಾಮಾಜಿಕ ಮತ್ತು ಆರ್ಥಿಕವಾಗಿ ಪ್ರಗತಿ ಸಾಧಿಸಬೇಕೆಂದೂ ಪ್ರಯತ್ನಿಸಿದರು. ಈ ಧೋರಣೆಯು ೧೯೩೦ರವರೆಗೆ ಇದ್ದಿತು. ಅಲ್ಲಿಯವರೆಗೆ ಅವರು ಗಾಂಧಿ, ನೆಹರೂ ಮೊದಲಾದವರನ್ನು ಸೇರಿಕೊಂಡು ಸುಧಾರಣಾ ಹೋರಾಟಗಾರರಾಗಿದ್ದರು. ೧೯೩೦ ಜನವರಿ ೨೬ರ ನಂತರ ಕಾಂಗ್ರೆಸ್ ಪೂರ್ಣಸ್ವಾತಂತ್ರ್ಯ ಪಡೆಯುವ ಘೋಷಣೆ ಹೊರಡಿಸಿತು. ಅನಂತರ ಗಾಂಧಿ, ನೆಹರೂ, ಸುಭಾಷ್ ಮೊದಲಾದವರು ಸ್ವಾತಂತ್ರ್ಯ ಹೋರಾಟಗಾರರಾಗಿ ಪರಿವರ್ತನೆ ಹೊಂದಿದರು. ಆದ್ದರಿಂದಲೇ ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಬಗ್ಗೆ ಒಂದು ನಿರೂಪಣೆ ಕೊಡಬೇಕಾಗಿದೆ. ಏನೆಂದರೆ, ಸ್ವಾತಂತ್ರ್ಯವನ್ನು ಕಳೆದುಕೊಂಡು ಅದನ್ನು ಮರಳಿ ಪಡೆಯಲು ಹೋರಾಟ ಮಾಡಿದವರನ್ನು ಸ್ವಾತಂತ್ರ್ಯ ಹೋರಾಟಗಾರರೆಂದು ಕರೆಯಬಹುದು.

* * *

ವಿದೇಶಿಯರ ವಿರುದ್ಧ ಹೋರಾಡಿದವರೆಲ್ಲರೂ ಸ್ವಾತಂತ್ರ್ಯ ಹೋರಾಟಗಾರರಲ್ಲ. ಹಿಂದೆ ಪೋರಸ್‌ನು ಅಲೆಗ್ಸಾಂಡರ್‌ನ ವಿರುದ್ಧವೂ ರಾಣಾಪ್ರತಾಪನು ಅಕ್ಬರನ ವಿರುದ್ಧವೂ ಸೆಣಸಿದ್ದರು. ಅವರು ವಿದೇಶೀ ಆಕ್ರಮಣಗಳನ್ನು ಎದುರಿಸಿದ ವೀರರಾಗಿದ್ದರು. ಅದೇ ರೀತಿ, ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಬ್ರಿಟಿಷರ ಆಕ್ರಮಣಗಳ ವಿರುದ್ಧ ಹೋರಾಡಿದ ವೀರರಾಗಿದ್ದರು. ಅವರು ಸ್ವತಂತ್ರವಾಗಿದ್ದು ಹೋರಾಟ ನಡೆಸಿದ್ದರು. ಆದ್ದರಿಂದ ಎಲ್ಲರನ್ನೂ ಸ್ವಾತಂತ್ರ್ಯ ಹೋರಾಟಗಾರರೆಂದು ಕರೆಯುವುದು ಸರಿಯೆನಿಸುವುದಿಲ್ಲ. ಕೇವಲ ಕಳೆದುಕೊಂಡ ಸ್ವಾತಂತ್ರ್ಯವನ್ನು ಮರಳಿ ಪಡೆಯಲು ಹೋರಾಡಿದವರನ್ನು ಮಾತ್ರ ಸ್ವಾತಂತ್ರ್ಯ ಹೋರಾಟಗಾರರೆಂದು ಕರೆಯುವುದು ಸೂಕ್ತವೆನಿಸುತ್ತದೆ.